ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ಹೊಸ ಮೋಟಾರು ವಾಹನ ಕಾಯ್ದೆ, 2019

ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು):-

1378 (1622) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹೊಸ ಮೋಟಾರು ವಾಹನ ಕಾಯ್ದೆ, 2019ರ ಅನ್ವಯ ವಿಧಿಸಲಾಗುತ್ತಿರುವ ಹೆಚ್ಚಿನ ಫೈನ್/ಪೆನಾಲ್ಟಿಯಿಂದ, ಸಂಚಾರ ನಿಯಮಗಳ ಉಲ್ಲಂಘನೆಯ ಪ್ರಕರಣಗಳು ಕಡಿಮೆ ಆಗಿರುತ್ತವೆಯೇ ;

(ಆ) ಈ ಕಾಯ್ದೆಯ ನಿಬಂಧನೆಗಳು ಅನುಷ್ಠಾನವಾಗಿರುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು ;

(ಇ) ಈ ಕಾಯ್ದೆಯ ಪ್ರಮುಖ ಅಂಶಗಳನ್ನು ಜಾರಿಗೊಳಿಸಿ, ನಿಯಮಗಳನ್ನು ಅನುಸರಣೆಗೊಳಿಸುವ ಹಂತದಲ್ಲಿ ಪೊಲೀಸ್ ಇಲಾಖೆಯಿಂದ ಮತ್ತು ಸಾರಿಗೆ ಇಲಾಖೆಯಿಂದ ನಡೆಯಬಹುದಾದ ಅಕ್ರಮಗಳು/ಭ್ರಷ್ಟಾಚಾರಗಳನ್ನು ತಡೆಯಲು ಸರ್ಕಾರ ರೂಪಿಸಿರುವ ಕಾರ್ಯವಿಧಾನಗಳೇನು ?